# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 993
2. ಸದಸ್ಯರ ಹೆಸರು : ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 12.03.2020
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ರಾಜ್ಯದ ಬಯಲು ಸೀಮೆಗಳಿಗೆ ಶಾಶ್ವತ ಕುಡಿಯುವ ನೀರನ್ನು ಒದಗಿಸುವ ಸಲುವಾಗಿ ಎತ್ತಿನಹೊಳೆ ಯೋಜನೆಯನ್ನು ಯಾವಾಗ ಪ್ರಾರಂಭ ಮಾಡಲಾಯಿತು; (ಮಾಹಿತಿ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಪರಿಷ್ಕೃತ ವಿವರವಾದ ಯೋಜನಾ ವರದಿಗೆ ದಿನಾಂಕ:17.02.2014 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಸದರಿ ಯೋಜನೆಯನ್ನು 2014ನೇ ಸಾಲಿನಲ್ಲಿ ಪ್ರಾರಂಭ ಮಾಡಲಾಗಿರುತ್ತದೆ. |
| ಆ) | ಈ ಯೋಜನೆಯ ಕಾಮಗಾರಿಯನ್ನು ಪ್ರಾರಂಭಿಸುವಾಗ ನಿಗದಿ ಮಾಡಿದ್ದ ಯೋಜನಾ ವೆಚ್ಚವೆಷ್ಟು; ಅಂಕಿ ಅಂಶಗಳನ್ನು ಒದಗಿಸುವುದು; | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ರೂ.8323.50 ಕೋಟಿ ಮೊತ್ತದ ಯೋಜನಾ ವರದಿಗೆ ದಿನಾಂಕ:13.7.2012 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. |
| ಇ) | ಈ ಯೋಜನಾ ಕಾಮಗಾರಿಗೆ ಹಾಲಿ ನಿಗದಿ ಮಾಡಿರುವ ಯೋಜನಾ ವೆಚ್ಚವೆಷ್ಟು; ಏಕೆ ಹೆಚ್ಚಿಗೆ ಮಾಡಲಾಗಿದೆ; ಎಂಬ ಕುರಿತು ಸಂಪೂರ್ಣ ಮಾಹಿತಿ ನೀಡುವುದು; | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ರೂ.12,912.36 ಕೋಟಿ ಮೊತ್ತದ ಪರಿಷ್ಕೃತ ಯೋಜನಾ ವರದಿಗೆ ಸರ್ಕಾರದಿಂದ ದಿನಾಂಕ:17.2.2014 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಪ್ರಸ್ತುತ ಹಾಲಿ ದರ ಸೂಚಿಯಂತೆ ಯೋಜನಾ ವರದಿಯನ್ನು ಪುನರ್ ಪರಿಷ್ಕರಿಸಲಾಗುತ್ತಿದ್ದು, ಅಂದಾಜು ಮೊತ್ತವು ಸುಮಾರು ರೂ.24,982.00 ಕೋಟಿಗಳಾಗಬಹುದೆಂದು ಅಂದಾಜಿಸಲಾಗಿದೆ. ಯೋಜನಾ ಅಂದಾಜು ಮೊತ್ತವು ಹೆಚ್ಚಾಗಲು ಪ್ರಮುಖ ಕಾರಣಗಳು ಈ ಕೆಳಗಿನಂತಿವೆ :<br>✓ 2014 ರಲ್ಲಿ ಅನುಮೋದನೆಯಾಗಿರುವ ಪರಿಷ್ಕೃತ ಯೋಜನಾ ವರದಿಯನ್ವಯ ಹಳೆಯ ಭೂಸ್ವಾಧೀನ ಕಾಯ್ದೆ ಅನ್ವಯ ಜಮೀನುಗಳ ಭೂಸ್ವಾಧೀನಕ್ಕೆ ಅವಕಾಶ ಕಲ್ಪಿಸಲಾಗಿದ್ದು, ಪ್ರಸ್ತುತ ಹೊಸ ಭೂಸ್ವಾಧೀನ ಕಾಯ್ದೆಯು 2014 ರಲ್ಲಿ ಜಾರಿಗೆ ಬಂದಿದ್ದು, ಇದರಿಂದಾಗಿ ಪರಿಹಾರ ಮೊತ್ತವನ್ನು ಮಾರುಕಟ್ಟೆ ದರದ 4 ಪಟ್ಟು ರಷ್ಟು ವಿತರಣೆ ಮಾಡಬೇಕಾಗಿರುವುದರಿಂದ ಅಂದಾಜು ಮೊತ್ತವು ಹೆಚ್ಚಾಗಿರುತ್ತದೆ.<br>✓ 2014ರಲ್ಲಿ ಅನುಮೋದನೆಯಾಗಿರುವ ಅಂದಾಜನ್ನು 2013-14ನೇ ಸಾಲಿನ ದರಪಟ್ಟಿ ಅನ್ವಯ ತಯಾರಿಸಲಾಗಿದ್ದು, ಪ್ರಸ್ತುತ 2019-20ನೇ ಸಾಲಿನ ದರ ಪಟ್ಟಿ ಅನ್ವಯ ಪರಿಷ್ಕರಿಸಲಾಗುತ್ತಿದೆ. ದರ ಪಟ್ಟಿಯಲ್ಲಿನ ಹೆಚ್ಚಳವು ಪ್ರತಿ ವರ್ಷ ಸರಾಸರಿ ಶೇ.10 ರಷ್ಟು ಎಂದು ಅಂದಾಜಿಸಿದ್ದು, ಇದರನ್ವಯ ಸುಮಾರು ರೂ.7200.00 ಕೋಟಿ ಹೆಚ್ಚುವರಿಯಾಗುವುದು.<br>✓ ಇದು ಕುಡಿಯುವ ನೀರಿನ ಯೋಜನೆಯಾಗಿರುವುದರಿಂದ ನೀರು ಪೋಲಾಗುವುದನ್ನು ಕಡಿಮೆ ಮಾಡಲು ಕಾಮಗಾರಿ ನಿರ್ವಹಣೆ ಸಂದರ್ಭದಲ್ಲಿ ಕಾಮಗಾರಿಯ ಸ್ಥಳಕ್ಕೆ ಅನುಗುಣವಾಗಿ ಕೆಲವು ಸ್ಟ್ರಕ್ಚರ್‌ಗಳನ್ನು (ಮೇಲ್ಗಾಲುವೆ, ಸುರಂಗ, ಕಟ್ & ಕವರ್ ಡಕ್ಟ್, ಚೂಟ್‌ಗಳು, ರೆಗ್ಯೂಲೇಟರ್‌ಗಳು ಮುಂತಾದವುಗಳು) ನಿರ್ವಹಿಸುವುದು ಅವಶ್ಯಕವಾಗಿರುತ್ತದೆ. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | ✓ ಅನುಮೋದನೆಯಾಗಿರುವ ಯೋಜನಾ ವರದಿಯಲ್ಲಿ ಫೀಡರ್ ಕಾಲುವೆಗಳಿಗೆ ತೆರದ ನಾಲೆ ನಿರ್ಮಿಸಲು ಅವಕಾಶ ಕಲ್ಪಿಸಿದ್ದು, ಇದು ಕುಡಿಯುವ ನೀರಿನ ಯೋಜನೆಯಾಗಿರುವುದರಿಂದ ನೀರು ಪೋಲಾಗುವುದನ್ನು ಕಡಿಮೆ ಮಾಡಲು, ನೀರಿನ ಮಾಲಿನ್ಯವನ್ನು ಮತ್ತು ಅಕ್ರಮ ನೀರು ಸೆಳೆಯುವಿಕೆಯನ್ನು ತಪ್ಪಿಸುವ ಸಲುವಾಗಿ ತೆರೆದ ನಾಲೆಯ ಬದಲಾಗಿ ಪೈಪ್ ಲೈನ್ ಅಳವಡಿಸಿವುದು ಸೂಕ್ತವೆಂದು ಅಂದಾಜು ಪರಿಶೀಲನಾ ಸಮಿತಿಯು ಅಭಿಪ್ರಾಯಿಸಿದ್ದು, ಅದರಂತೆ ಕ್ರಮ ಕೈಗೊಳ್ಳಲಾಗಿರುತ್ತದೆ.<br>✓ ಅನುಮೋದನೆಯಾಗಿರುವ ಯೋಜನಾ ವರದಿಯಲ್ಲಿ ಯಾವುದೇ ರಸ್ತೆ ಅಭಿವೃದ್ಧಿ ಕಾಮಗಾರಿಗಳಿಗೆ ಅವಕಾಶ ಕಲ್ಪಿಸಿರಲಿಲ್ಲ. ಆದರೆ, ಸ್ಥಳೀಯ ಜನಪ್ರತಿ ನಿಧಿಗಳು/ ರೈತರು/ ಸಾರ್ವಜನಿಕರ ಒತ್ತಾಯದ ಮೇರೆಗೆ ಹಾಗೂ ಎತ್ತಿನಹೊಳೆ ಯೋಜನಾ ಕಾಮಗಾರಿಗಳಿಗೆ ಪೂರಕವಾಗಿ ಯೋಜನಾ ವ್ಯಾಪ್ತಿಯ ಪ್ರದೇಶದಲ್ಲಿ ಹಲವು ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿರುತ್ತದೆ.<br>✓ ಕೆ.ಪಿ.ಟಿ.ಸಿ.ಎಲ್ ರವರ ಸಲಹೆಯಂತೆ ಹೆಚ್ಚುವರಿ ವಿದ್ಯುತ್ ಉಪ ಸ್ಥಾವರವನ್ನು ನಿರ್ಮಿಸಲು ಅವಕಾಶ ಮಾಡಲಾಗಿರುತ್ತದೆ.<br>✓ ಗುತ್ತಿಗೆ ಕರಾರಿನಲ್ಲಿ price variation clause ಗೆ ಅವಕಾಶವಿದ್ದು, ಕಾಮಗಾರಿ ಅನುಷ್ಠಾನದ ಅವಧಿಯಲ್ಲಿ ಉಂಟಾಗುವ ಬೆಲೆ ವ್ಯತ್ಯಾಸದಿಂದಾಗಿ ಮತ್ತು ಟೆಂಡರ್ ಪ್ರೀಮಿಯಂನಿಂದಾಗಿ ಉಂಟಾಗಿರುವ ಹೆಚ್ಚಳದಿಂದಾಗಿ. |
| ಈ) | ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕಿನ ಭೈರಗೊಂಡ್ಲುವಿನಲ್ಲಿ ರೂ.700 ಕೋಟಿ ವೆಚ್ಚದಲ್ಲಿ ಜಲಾಶಯ ನಿರ್ಮಾಣ ಮಾಡುವ ಕಾಮಗಾರಿಯು ಪ್ರಗತಿ ಕಾರ್ಯ ಯಾವ ಹಂತದಲ್ಲಿದೆ; (ಸಂಪೂರ್ಣ ವಿವರ ನೀಡುವುದು) | ಭೈರಗೊಂಡ್ಲು ಜಲಾಶಯ ನಿರ್ಮಾಣ ಕಾಮಗಾರಿಗೆ ಸಂಬಂಧಿಸಿದಂತೆ, ಟೆಂಡರ್ ಆಧಾರದ ಮೇಲೆ ಕಾಮಗಾರಿಯನ್ನು ಗುತ್ತಿಗೆ ದಾರರಿಗೆ ವಹಿಸಲಾಗಿದ್ದು, ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಗೊಳ್ಳುವ ಸಂದರ್ಭದಲ್ಲಿ ಕೊರಟಗೆರೆ ತಾಲ್ಲೂಕಿನ ರೈತರು ದೊಡ್ಡಬಳ್ಳಾಪುರ ತಾಲ್ಲೂಕಿನ ರೈತರಿಗೆ ನೀಡುವ ಪರಿಹಾರದರದಂತೆ ಕೊರಟಗೆರೆ ರೈತರಿಗೂ ಸಹಾ ಏಕರೂಪದರ ನೀಡಲು ಒತ್ತಾಯಿಸಿದ್ದರಿಂದ ಕಾಮಗಾರಿಗಳಿಗೆ ಅಡತಡೆ ಉಂಟಾಗಿರುತ್ತದೆ. |
| ಉ) | ಎತ್ತಿನಹೊಳೆ ಯೋಜನೆಯ ಕಾಮಗಾರಿಯನ್ನು ಸಂಪೂರ್ಣವಾಗಿ ಯಾವಾಗ ಪೂರ್ಣಗೊಳಿಸಲಾಗುವುದು? | ಈ ಯೋಜನೆಯನ್ನು 2023-24ನೇ ಸಾಲಿನಲ್ಲಿ ಪೂರ್ಣಗೊಳಿಸಲು ಯೋಜಿಸಲಾಗಿರುತ್ತದೆ. |

**ಸಂಖ್ಯೆ: ಜಸಂಇ 16 ಡಬ್ಲ್ಯೂಎಲ್ಎ 2020**

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು
(ಬೃಹತ್ ಮತ್ತು ಮಧ್ಯಮ ನೀರಾವರಿ)